



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ


| ಸಂಪುಟ: ೦೩ ಸಂಚಿಕೆ: ೨ | ಮೇ ೨೦೧೬ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 03 Issue 2 | May 2016 | Pages - 8 | A. Sub. - Rs. 20/- | Editor : Sri. B.R. Ravindranath |





**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–



ವಿಳಾಸ

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಸ್ಥಾಪನೆ : ೦೬–೦೩–೧೯೭೮
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೩೮೭೭, ೨೬೬೭೬೭೭೩
ಇಮೇಲ್ :
bmsritrust@gmail.com
web: www.bmshri.org


## ಅಭಿನಂದನೆಗಳು



ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಬೆಂಗಳೂರು ಮಹಾ ನಗರ ಸಾರಿಗೆ ಸಂಸ್ಥೆ ಸ್ಥಾಪಿಸಿರುವ 'ನೃಪತುಂಗ ಸಾಹಿತ್ಯ ಪ್ರಶಸ್ತಿ'ಗೆ ವಿದ್ವಾಂಸ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿ ಅವರು ಆಯ್ಕೆಯಾಗಿದ್ದಾರೆ. ಪ್ರಶಸ್ತಿಯು ರೂ.7 ಲಕ್ಷ ನಗದು ಒಳಗೊಂಡಿದೆ.

ಪ್ರೊ.ಟಿ.ವಿ.ವೆಂಕಟಾಚಲ ಶಾಸ್ತ್ರಿಗಳು ಒಬ್ಬ ಮಹತ್ವದ ಕನ್ನಡ ಸಾಹಿತ್ಯ ಪ್ರಕಾರದ ಸಂಶೋಧಕರು, ಪ್ರಾಧ್ಯಾಪಕರು, ಹಾಗೂ ಉತ್ಕೃಷ್ಟ ಸಂಪಾದಕರು. ತಮ್ಮ ಜೀವನದುದ್ದಕ್ಕೂ ನಿರಂತರವಾಗಿ ಕನ್ನಡಮ್ಮನ ಪರಿಚಾರಕರಾಗಿ ದುಡಿಯುತ್ತಾ ಬಂದಿದ್ದಾರೆ. ಅವರು, 26 ಆಗಸ್ಟ್, 1933 ರಂದು, ಬೆಂಗಳೂರು ಜಿಲ್ಲೆಯ ಕನಕಪುರ ತಾಲ್ಲೂಕಿನ 'ಹಾರೋಹಳ್ಳಿ'ಯಲ್ಲಿ ಜನಿಸಿದರು. ಇವರ ತಂದೆ, 'ವೆಂಕಟ ಸುಬ್ಬಾಶಾಸ್ತ್ರಿ'. ತಾಯಿ, 'ಸುಬ್ಬಮ್ಮ'. ವೆಂಕಚಾಚಲ ಶಾಸ್ತ್ರಿಗಳ ವಿದ್ಯಾರ್ಹತೆ : ಎಂ.ಎ ; ಪಿ.ಎಚ್.ಡಿ. ಪದವಿಯ ಬಳಿಕ, ವೆಂಕಟಾಚಲ ಶಾಸ್ತ್ರಿಗಳು ಮೈಸೂರು ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕ, ಪ್ರಾಧ್ಯಾಪಕರಾಗಿ, ವೃತ್ತಿಯನ್ನು ಮಾಡಿ, ನಂತರ, ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ, (1991–1993) ದುಡಿದರು. 'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ರಚನಾ ಸಮಿತಿಯ ಸಂಪಾದಕ ಸಮಿತಿಯ ಸದಸ್ಯ'ರಾಗಿ ಕೆಲಸಮಾಡಿದರು. (1975–1995) ಮುಂದೆ, ನಿಘಂಟು ಪರಿಷ್ಕರಣ ಸಮಿತಿ ಪ್ರಧಾನ ಸಂಪಾದಕರಾಗಿ ಕಾರ್ಯನಿರ್ವಹಿಸಿದರು. (1993)

**ಡಾ.ಟಿ.ವಿ. ವೆಂಕಟಾಚಲ ಶಾಸ್ತ್ರಿ ಅವರು ಅಕ್ಟೋಬರ್–2001ರಿಂದ ಮಾರ್ಚ್ 2006 ಅವಧಿಯಲ್ಲಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾಗಿದ್ದರು. ಅವರು ಇಂದಿಗೂ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಸಕ್ರಿಯರಾಗಿ ಭಾಗವಹಿಸುತ್ತಿರುತ್ತಾರೆ.**

### ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಮಾರ್ಚ್– ಏಪ್ರಿಲ್ ತಿಂಗಳಲ್ಲಿ ನಡೆದ ಕಾರ್ಯಕ್ರಮಗಳು

## ಎರಡು ಗ್ರಂಥಗಳ ಲೋಕಾರ್ಪಣೆ ಕಾರ್ಯಕ್ರಮ

ದಿನಾಂಕ 11–4–2016ರ ಸಂಜೆ ಪ್ರತಿಷ್ಠಾನ ಪ್ರಕಟಿಸಿದ ಎರಡು ಬೃಹತ್ ಗ್ರಂಥಗಳ ಲೋಕಾರ್ಪಣೆ ಕಾರ್ಯಕ್ರಮವು ಬಹಳ ಯಶಸ್ವಿಯಾಗಿ ಸಂಪನ್ನಗೊಂಡಿತು. ಬಿಡುಗಡೆಯಾದ ಗ್ರಂಥಗಳು ... **2ನೇ ಪುಟಕ್ಕೆ**



## ಸಂಪಾದಕೀಯ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಹಿಂದಿನ ಅಧ್ಯಕ್ಷರಾಗಿದ್ದ ನಾಡಿನ ಪ್ರಸಿದ್ಧ ವಿದ್ವಾಂಸರಾದ ನಮ್ಮೆಲ್ಲರಿಗೂ ಹಿರಿಯರಾದ ಡಾ.ಟಿ.ವಿ. ವೆಂಕಟಾಚಲ ಶಾಸ್ತ್ರಿ ಅವರು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಬೆಂಗಳೂರು ಮಹಾ ನಗರ ಸಾರಿಗೆ ಸಂಸ್ಥೆ ಸ್ಥಾಪಿಸಿರುವ 'ನೃಪತುಂಗ ಸಾಹಿತ್ಯ ಪ್ರಶಸ್ತಿ'ಗೆ ಆಯ್ಕೆಯಾಗಿರುವುದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಬಳಗಕ್ಕೆ ಸಂತಸವನ್ನು ತಂದಿರುತ್ತದೆ. ಅವರಿಗೆ ನಮ್ಮೆಲ್ಲರ ಹೃದಯಪೂರ್ವಕ ಅಭಿನಂದನೆಗಳು.

ಹೊಂಗನಸು ಹೆಚ್ಚು ಆಕರ್ಷಕವಾಗಿ ವರ್ಣಮಯವಾಗಿದ್ದರೂ ಹಾಗೂ ಅದನ್ನು ಮುದ್ರಿಸುವ ವೆಚ್ಚ ಹೆಚ್ಚಾಗಿದ್ದರೂ ಚಂದಾ ದರವನ್ನು ಹೆಚ್ಚಿಸಿರುವುದಿಲ್ಲ. ಎಲ್ಲಾ ಓದುಗರೂ ಹೊಂಗನಸು ಪತ್ರಿಕೆಯ ಚಂದಾದಾರರಾಗಬೇಕೆಂದು ನಮ್ಮ ಆಶಯವಾಗಿದೆ. ಈಗಾಗಲೇ ಅರ್ಧಕ್ಕೂ ಹೆಚ್ಚು ಸದಸ್ಯರು ಚಂದಾದಾರರಾಗಿರುತ್ತರೆ. ಉಳಿದ ಸದಸ್ಯರೂ ಆದಷ್ಟೂ ಬೇಗನೆ ಚಂದಾದಾರರಾಗಬೇಕೆಂದು ಕೋರುತ್ತೇವೆ. ಜೊತೆಗೆ ನಿಮ್ಮ ಬಂಧು ಮಿತ್ರರೂ ಹಾಗೂ ಇತರ ಸಾಹಿತ್ಯಸಕ್ತರೂ ಚಂದಾದಾರರಾದಲ್ಲಿ ಇನ್ನೂ ಹೆಚ್ಚಿನ ಪ್ರತಿಗಳನ್ನು ಮುದ್ರಿಸಲು ಸಹಕಾರಿಯಾಗುತ್ತದೆ. ನಿಮ್ಮ ಸಹಕಾರವನ್ನು ಎದುರು ನೋಡುತ್ತಿದ್ದೇವೆ.

**ಬಿಆರ್ ರವೀಂದ್ರನಾಥ್**
ಸಂಪಾದಕರು

### ಮೇ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಬಿ ಪುಟ್ಟಸ್ವಾಮಯ್ಯ | 24–5–1897 |
| ಆನಕೃ | 9–5–1908 |
| ಭಾರತಿ ಸುತ ಶಾನಭಾಗ್ ರಾಮಡು ನಾರಾಯಣರಾವ್ | 15–5– 1915 |
| ಜಿ ಎನ್ ಅಮೂರ | 8–5–1928 |
| ಶಂಕರ ಮೊಕಾಶಿ ಪುಣೇಕರ | 8–5– 1928 |
| ಎಂ ಚಿದಾನಂದ ಮೂರ್ತಿ | 10–5– 1931 |
| ಗಿರೀಶ್ ಕಾರ್ನಾಡ್ | 19–5– 1938 |

### ಏಪ್ರಿಲ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಡಿಎಲ್ ನರಸಿಂಹಚಾರ್ಯ | 8–5–1971 |

### ಆಧುನಿಕ ವಚನಗಳು

**–ಜಿ. ಅಬ್ದುಲ್ ಬಷೀರ್**

ನೆಲ ನಮ್ಮದೆನ್ನವರು
ನೆಲ ನಮ್ಮದಲ್ಲ
ಜಲ ನಮ್ಮದೆನ್ನುವರು
ಜಲ ನಮ್ಮದಲ್ಲ
ನೆಲಕ್ಕಾಗಿ ಜಲಕ್ಕಾಗಿ
ಕಾದು ಸುಣ್ಣಾದವರ ನೋಡಿ
ನಗುತಿದ್ದ ನಮ್ಮ 'ಅಲ್ಲಾರಖಾ'. ||6||

**1ನೇ ಪುಟದಿಂದ ...**

**ಶಬ್ದಾನು ಶಾಸನಂ** :–ಒಂದು ಸಮಗ್ರ ಅಧ್ಯಯನ – ಲೇಖಕರು ಡಾ॥ ಉಪ್ಪಂಗಳರಾಮಭಟ್ಟ

**ಸೌಂದರ್ಯಲಹರಿ:–** ಅನುವಾದ – ಸಂಪಾದಕರು ಪ್ರೊ.ಜಿ. ಅಶ್ವತ್ಥನಾರಾಯಣ ಮೂಲ: ಪ್ರೊ. ಎಂ.ವಿ. ಸೀತಾರಾಮಯ್ಯ ಮತ್ತು ಶ್ರೀ ಕಪನೀ ಪತಯ್ಯ

ಈ ಎರಡೂ ಗ್ರಂಥಗಳನ್ನು ನಾಡಿನ ಪ್ರಸಿದ್ಧ ವಿದ್ವಾಂಸರು ಮತ್ತು ಪ್ರತಿಷ್ಠಾನದ ಮಾಜಿ ಅಧ್ಯಕ್ಷರಾದ, ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರಿ ಅವರು ಲೋಕಾರ್ಪಣೆ ಮಾಡಿ ಈ ಕೃತಿಗಳ ಬಗ್ಗೆ ಹೀಗೆ ಅಭಿಪ್ರಾಯ ಪಟ್ಟರು:–

ಉಪ್ಪಂಗಳ ರಾಮಭಟ್ಟರು, ಮೊದಲಿನಿಂದಲೂ ಕಾಲೇಜು ವಿದ್ಯಾರ್ಥಿಗಳಿಗೆ ಭಾಷೆ, ವ್ಯಾಕರಣಾದಿಗಳನ್ನು ಬೋಧಿಸಿದ ವಿದ್ವಾಂಸರು. ಅವರ ಸಂಶೋಧನಾ ವಿಷಯವೂ ಸಹ ಭಟ್ಟಾಕಲಂಕನ ಕರ್ಣಾಟಕ ಶಬ್ದಾನುಶಾಸನದೇ . ಲೇಖಕರು ವಿಷಯ ಸ್ಪಷ್ಟತೆಗಾಗಿ ಕನ್ನಡದ ಇತರ ವ್ಯಾಕರಣ ಗ್ರಂಥಗಳನ್ನು ಪರಾಮರ್ಶಿಸಿ, ಸಂಸ್ಕೃತದ ಇತರ ವ್ಯಾಕರಣಗಳೊಂದಿಗೆ ಹೋಲಿಸಿ ಮತ್ತು ಇತರ ದ್ರಾವಿಡ ಭಾಷೆಗಳ ವಿಚಾರಗಳನ್ನೂ ತೆಗೆದುಕೊಂಡು, ತಮ್ಮ ಸ್ವಂತ ಅಭಿಪ್ರಾಯಗಳನ್ನೂ ನೀಡಿ, ಬಹಳ ಶ್ರಮವಹಿಸಿ ಈ ಸಮಗ್ರ ಅಧ್ಯಯನವನ್ನು ಹೊರತಂದಿದ್ದಾರೆ. ಇವರು ಅಭಿನಂದನಾರ್ಹರು ಎಂದು ಶಾಸ್ತ್ರಿಗಳು ಅಭಿಪ್ರಾಯ ವ್ಯಕ್ತಪಡಿಸಿದರು. ಎಂ.ಫಿಲ್ ಮತ್ತು ಪಿ.ಎಚ್.ಡಿ ವಿದ್ಯಾರ್ಥಿಗಳು ಇದರ ಸದುಪಯೋಗ ಪಡೆಯಬಹುದೆಂದು ಕರೆನೀಡಿದರು.

ಪ್ರೊ. ಅಶ್ವತ್ಥನಾರಾಯಣರವರು ಶ್ರೀ.ಎಂ.ವಿ.ಸೀ ರವರ ವಾರ್ಧಕ ಷಟ್ಪದಿಯಲ್ಲಿ ಅನುವಾದಿಸಿದ ಅಪ್ರಕಟಿತ ಪದ್ಯಾನುವಾದದ ಹಸ್ತ ಪ್ರತಿಯನ್ನು ಮೇಳೈಸಿ, ಪರಿಷ್ಕರಿಸಿ ಪಾಠಾಂತರಗೊಳಿಸಿ, ಪದ ವಿಭಾಗ ಮಾಡಿ, ತಾತ್ಪರ್ಯ, ಟಿಪ್ಪಣಿಗಳನ್ನೂ ನೀಡಿ ಈ ಗ್ರಂಥದ ಮೌಲ್ಯವನ್ನು ವೃದ್ಧಿಗೊಳಿಸಿದ್ದಾರೆ.. ಈ ಗ್ರಂಥದ ನೇಪಥ್ಯದಲ್ಲಿ ಬಹಳ ಮಂದಿ ಇವರಿಗೆ ನೆರವಾಗಿರುವುದು ವೇಧ್ಯವಾಗುತ್ತದೆ. ವಿಷಯಾನುಕ್ರಮಣಿಕೆಯ ಪಟ್ಟಿಯನ್ನು ಪರಿಶೀಲಿಸಿದರೆ, ಸೌಂದರ್ಯಲಹರಿಯ ಈ ಟೀಕಾ ಕೃತಿ ಕನ್ನಡದಲ್ಲೇ ಮೊದಲ ಬಾರಿಗೆ ಪ್ರಕಟವಾಗುತ್ತಿದೆ ಎಂದು ಅಭಿಪ್ರಾಯಪಟ್ಟರು.

ಪ್ರೊ. ಜಿ.ಅಬ್ದುಲ್ ಬಷೀರ್ ಅವರು ಮುಖ್ಯ ಅತಿಥಿಗಳನ್ನು, ಪುಸ್ತಕಗಳ ಸಂಪಾದಕರನ್ನು ಮತ್ತು ಸಭಿಕರನ್ನು ಸ್ವಾಗತಿಸಿದರು.ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅವರು ಪ್ರಾಸ್ತಾವಿಕ ನುಡಿಗಳನ್ನು ಆಡಿದರು.ಡಾ॥ ಉಪ್ಪಂಗಳರಾಮಭಟ್ಟ ಅವರು "ಶಬ್ದಾನು ಶಾಸನಂ :–ಒಂದು ಸಮಗ್ರ ಅಧ್ಯಯನ" ಗ್ರಂಥದ ಪರಿಚಯ ಮಾಡಿಕೊಟ್ಟರು. ಪ್ರೊ. ಅಶ್ವತ್ಥನಾರಾಯಣ ಅವರು ಸೌಂದರ್ಯಲಹರಿ ಗ್ರಂಥದ ಬಗ್ಗೆ ಪರಿಚಯ ಮಾಡಿಕೊಟ್ಟರು. ಕಾರ್ಯಕ್ರಮವು ಖಜಾಂಚಿ ಶ್ರೀರಾಮಪ್ರಸಾದ್ ಅವರ ವಂದನಾರ್ಪಣೆಯೊಂದಿಗೆ ಸಂಪನ್ನಗೊಂಡಿತು.

**ಅಂದಿನ ದಿನದ ಕಾರ್ಯಕ್ರಮದ ಅವಧಿಯಲ್ಲೇ ಸೌಂದರ್ಯ ಲಹರಿಗ್ರಂಥದ 165 ಪ್ರತಿಗಳು ಹಾಗೂ ಶಬ್ದಾನು ಶಾಸನಂ :– ಒಂದು ಸಮಗ್ರ ಅಧ್ಯಯನ ಗ್ರಂಥದ 36 ಪ್ರತಿಗಳು ಮಾರಾಟಗೊಂಡು ಪ್ರಕಟಣೆಗಳ ಉಪಯುಕ್ತತೆಯನ್ನು ಸಾಬೀತುಪಡಿಸಿವೆ.**

***ಪ್ರತಿಷ್ಠಾನವು ಓಲೆಗರಿಗಳ ಮತ್ತು ಕಾಗದ ಹಸ್ತಪ್ರತಿಗಳ ಸಂರಕ್ಷಣೆ ಮತ್ತು ದಾಖಲೀಕರಣದ ಕಾರ್ಯವನ್ನು ನಿರ್ವಹಿಸುತ್ತಿದೆ. ಆಸಕ್ತರು ಹಸ್ತಪ್ರತಿ ವಿಭಾಗವನ್ನು ಸಂಪರ್ಕಿಸಬೇಕೆಂದು ಕೋರುತ್ತೇವೆ.***

# ಮೇ 2016 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

**ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ**



## ದಿನಾಂಕ 04–05–2016 ರಂದು ಬುಧವಾರ ಸಂಜೆ 6 ಗಂಟೆಗೆ

ಗಮಕ ವಾಹಿನಿ ಕಾರ್ಯಕ್ರಮ ಮಾಲೆ– 4

ಗಮಕ ರೂಪಕ: ಕುಮಾರ ವ್ಯಾಸ ಭಾರತದಿಂದ“ಉತ್ತರನ ಪೌರುಷ”

ನಡೆಸಿ ಕೊಡುವವರು : ಶ್ರೀ ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನ

ವಾಚನ :ರಜತ್, ವ್ಯಾಖ್ಯಾನ : ಕು. ಸ್ನಿಗ್ಧ

ನೇತೃತ್ವ :ಶ್ರೀಮತಿ ಸಿ.ವಿ. ಶ್ರೀಮತಿ

## ದಿನಾಂಕ 06–05–2016 ಶುಕ್ರವಾರ ಸಂಜೆ 6 ಗಂಟೆ



ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ಸಾಕ್ಷ್ಮ ಚಿತ್ರಗಳ ಪ್ರದರ್ಶನ

## 12–05–2016 ಗುರುವಾರ



‘ಅಕ್ಕರಗೊಟ್ಟಿ’

ಎರಡು ಶಾಸನೋಕ್ತ ಬಿರುದಾವಳಿಗಳು

**1. ಸವತಿ ಗಂಧವಾರಣೆ 2. ಶನಿವಾರ ಸಿದ್ಧ**

ಚಾಲನೆ : ಡಾ. ಕೆ. ಆರ್. ಗಣೇಶ್



## 16–05–2016 ಸೋಮವಾರ ಸಂಜೆ 6 ಗಂಟೆ

ವಚನ ವಿಹಾರ

ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ

## 23–05–2016 ಸೋಮವಾರ 6 ಗಂಟೆ

ಪ್ರೊ॥ ಸಿಕೆ ನಾಗರಾಜರಾವ್, ಪ್ರೊ॥ ಶ್ರೀನಿವಾಸರಾವ್ ಕೊರಟಿ, ಪ್ರೊ॥ ಕವೆಂ. ರಾಘವಾಚಾರ್–ದತ್ತಿ ಕಾರ್ಯಕ್ರಮ

ಉಪನ್ಯಾಸ: ಡಾ. ಪ್ರಭಾಶಂಕರ್ ಪ್ರೇಮಿ

ನಿವೃತ್ತ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯ

ವಿಷಯ :ಹಿಂದಿ ಮತ್ತು ಕನ್ನಡ ಸಾಹಿತ್ಯ



**ಪ್ರೊ॥ ಕೊರಟಿ ಶ್ರೀನಿವಾಸ ರಾವ್**



**ಪ್ರೊ॥ ಸಿ ಕೆ ನಾಗರಾಜ ರಾವ್**



## 27–05–2016 ಶುಕ್ರವಾರ

ಡಾ.ಸೂ.ವೆಂ ಅರಗ ದತ್ತಿ ವಿಮರ್ಶಾ ಪ್ರಶಸ್ತಿ

ಪ್ರಶಸ್ತಿ ಪ್ರದಾನ–ಅಧ್ಯಕ್ಷತೆ

ಶ್ರೀ ಎಸ್. ಆರ್. ವಿಜಯಶಂಕರ್

ಕನ್ನಡದ ಪ್ರಸಿದ್ಧ ವಿಮರ್ಶಕರು. ಅನೇಕ ಬಹುರಾಷ್ಟ್ರೀಯ ಮಾಹಿತಿ ತಂತ್ರಜ್ಞಾನ ಕಂಪನಿಗಳಲ್ಲಿ ಉನ್ನತ ಹುದ್ದೆ ನಿರ್ವಹಿಸಿದ ಅನುಭವಿ.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಮಾರ್ಚ್2016–ಏಪ್ರಿಲ್2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## "ಬಿ.ಎಂ.ಶ್ರೀ ನೆನಪು"



ದಿನಾಂಕ 23–03–2016 ರಂದು ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ಶ್ರೀ ಕುವೆಂಪು ವಿದ್ಯಾ ಪರಿಷತ್ತು, ಮೈಸೂರು ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಹಯೋಗದಲ್ಲಿ "ಬಿ.ಎಂ.ಶ್ರೀ ನೆನಪು" ಕಾರ್ಯಕ್ರಮವನ್ನು ಮೈಸೂರು ಜಯಲಕ್ಷ್ಮಿಪುರಂ ನಲ್ಲಿ ಇರುವ ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್ ನ ಶ್ರೀ ವಿವೇಕಾನಂದ ಪದವಿ ಪೂರ್ವ ಕಾಲೇಜು ಸಭಾಂಗಣದಲ್ಲಿ ನಡೆಸಲಾಯಿತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅವರು ನೆರವೇರಿಸಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಚಟುವಟಿಕೆಗಳನ್ನು ವಿವರಿಸಿದರು. ಬಿ.ಎಂ.ಶ್ರೀ ಅವರನ್ನು ಕುರಿತು ಪ್ರಸಿದ್ಧ ಸಾಹಿತಿ ಡಾ. ಮಳಲಿ ವಸಂತಕುಮಾರ ವಿಶೇಷ ಉಪನ್ಯಾಸ ನೀಡಿದರು. ಮೈಸೂರು ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿಗಳು ಹಾಗೂ ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್ ನ ಅಧ್ಯಕ್ಷರಾದ ಡಾ. ಶಶಿಧರಪ್ರಸಾದ್ ಅವರು ಅಧ್ಯಕ್ಷತೆ ವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಹಿರಿಯ ಸಾಹಿತಿ ನಾಡೋಜ ಡಾ. ದೇ. ಜವರೇ ಗೌಡ ಅವರು ಉಪಸ್ಥಿತರಿದ್ದರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಶ್ರೀ ರಾಮಪ್ರಸಾದ್,ರವೀಂದ್ರನಾಥ್, ಪ್ರೊ. ಅಬ್ದುಲ್ ಬಶೀರ್, ಪ್ರೊ. ಅನಿಲ್ ಕುಮಾರ್,ಪ್ರೊ. ಹೆಚ್. ಶೇಷಗಿರಿರಾವ್, ಶ್ರೀ ಗುರುಪ್ರಸಾದ್, ಹಾಗೂ ಪ್ರೊ. ಶಾಂತರಾಜು ಅವರು ಉಪಸ್ಥಿತರಿದ್ದರು.

## 24–03–2016 ರಂದು ಸೋಸಲೆ ಅಯ್ಯಾಶಾಸ್ತ್ರಿ, ಶಂಬಾ ಜೋಷಿ ಎಂ.ಜಿ. ನಂಜುಂಡಾರಾಧ್ಯ ದತ್ತಿ ಕಾರ್ಯಕ್ರಮದಡಿಯಲ್ಲಿ

ಡಾ. ಕರಿಗೌಡ ಬೀಚನಹಳ್ಳಿ, ಎಮರಿಟಸ್ ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ ಅವರು ಕನ್ನಡ ಭಾಷೆಯ ಪ್ರಾಚೀನತೆ ಎಂಬ ವಿಷಯದ ಬಗ್ಗೆ ವಿದ್ವತ್ ಪೂರ್ಣ ಉಪನ್ಯಾಸವನ್ನು ನೀಡಿದರು. ಅವರು ಕನ್ನಡ ಭಾಷೆಯ ಬೆಳವಣಿಗೆಯ ಇತಿಹಾಸ, ಕನ್ನಡ ಭಾಷೆಗೆ ಇದ್ದ ಸ್ಥಾನಮಾನ ಹಾಗೂ ಇತರ ಹಲವಾರು ವಿಷಯಗಳ ಬಗ್ಗೆ ಹೊಸ ಬೆಳಕನ್ನು ಚೆಲ್ಲಿದರು. ಗೌರವ ಕಾರ್ಯದರ್ಶಿ ರವೀಂದ್ರನಾಥ್ ಸ್ವಾಗತವನ್ನು ಕೋರಿದರು. ಅಧ್ಯಕ್ಷರಾದ ಡಾ. ಪಿ.ವಿ ನಾರಾಯಣ ಅವರು ಕನ್ನಡ ಭಾಷೆಯ ಬಗ್ಗೆ ನಡೆದಿರುವ ಸಂಶೋಧನೆಗಳ ಬಗ್ಗೆ ವಿವರ ನೀಡಿದರು.




## ಗಮಕ ವಾಹಿನಿ ಕಾರ್ಯಕ್ರಮ ಮಾಲೆ




ಈ ಮಾಲೆಯ ಅಡಿಯಲ್ಲಿ ದಿನಾಂಕ 06–04–2016ರಂದು ಶ್ರೀ ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ವತಿಯಿಂದ

ಗಮಕ ರೂಪಕ: ಕೆ ರಾಮಸ್ವಾಮಿ ಅಯ್ಯಂಗಾರ್ ವಿರಚಿತ "ಭರತ ಭಕ್ತಿ ಕಾವ್ಯ"ಪ್ರಸಂಗವನ್ನು ಕು. ಹರ್ಷಿತಾ, ಅರ್ಪಿತಾ, ಅಕ್ಷತಾ, ಅರ್ಚಿತ, ಕೆ.ಆರ್. ವಿಭಾ, ಯಾಮಿನಿ ಆಸೂರಿ ಅವರುಗಳು ಶ್ರೀಮತಿ ಸುಮಾ ಪ್ರಸಾದ್ಅವರ ನೇತೃತ್ವದಲ್ಲಿ ನಡೆಸಿ ಕೊಟ್ಟರು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ –

ಸಾಕ್ಷ್ಯ ಚಿತ್ರಗಳ ಪ್ರದರ್ಶನದಲ್ಲಿ 05–04–2016ರಂದು ಕರ್ನಾಟಕದ ಹೆಸರಾಂತ ವ್ಯಕ್ತಿಗಳು ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು. ಈ ಸಾಕ್ಷ್ಯ ಚಿತ್ರಗಳು ಬಹಳ ಉಪಯುಕ್ತವಾಗಿದ್ದವು.

## ಡಿ.ವಿ.ಜಿ. ಮತ್ತು ಕೆ.ಪಿ.ರಾವ್ ದತ್ತಿ ಕಾರ್ಯಕ್ರಮ

12–4–2016 ರಂದು ಡಿ.ವಿ.ಜಿ. ಮತ್ತು ಕೆ.ಪಿ.ರಾವ್ ದತ್ತಿ ಕಾರ್ಯಕ್ರಮದಡಿಯಲ್ಲಿ ಡಾ. ಮಹಮ್ಮದ್ ಭಾಷಾ, ಸೂಳಂ, ಪತ್ರಕರ್ತರು, ವಿಜಯ ಕರ್ನಾಟಕ ಅವರು ಪತ್ರಿಕೋದ್ಯಮ ಮತ್ತು ಭಾಷೆ ವಿಷಯದ ಬಗ್ಗೆ ಉಪನ್ಯಾಸ ನೀಡಿದರು

ಈ ವರ್ಷದ ಡಿ.ವಿ.ಜಿ ಮತ್ತು ಕೆ.ಪಿ.ರಾವ್ ದತ್ತಿ ಕಾರ್ಯಕ್ರಮ, ಡಿ.ವಿ.ಜಿಯವರ



ಮೆಚ್ಚಿನ ವಿಷಯುವಾದ ಪತ್ರಿಕೋದ್ಯಮದ ಬಗ್ಗೆ ಏಪ್ರಿಲ್ 12ರಂದು ಆಯೋಜಿಸಲಾಗಿತ್ತು. ವಿಜಯಕರ್ನಾಟಕದ ಹಿರಿಯ ಪತ್ರಕರ್ತರಾದ ಡಾ॥ ಮಹಮ್ಮದ್ ಭಾಷಾಗೂಳ್ಯಂ ಅವರು ಉಪನ್ಯಾಸ ನೀಡಲು, ಸಾಹಿತ್ಯಕ ಚಟುವಟಿಕೆಗಳಲ್ಲಿ ಸದಾ ಮಂಚೂಣಿಯಲ್ಲಿರುವ ಬಿ.ಎಂ.ಶ್ರೀ ಪ್ರತಿಷ್ಠಾನಕ್ಕೆ ಆಹ್ವಾನಿತರಾಗಿ ಬಂದದ್ದು, ತಮ್ಮ ಒಂದು ಸುಯೋಗವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಕನ್ನಡ ಭಾಷೆಯ ಬೆಳವಣಿಗೆಯನ್ನು ಪೂರ್ವ ಹಳಗನ್ನಡ ಕಾಲಘಟ್ಟದಿಂದ ಪ್ರಾರಂಭಿಸಿ, ಶಾಸನಗಳಲ್ಲಿ ಕನ್ನಡ ಭಾಷೆಯ ಬಳಕೆ, ಬೆಳವಣಿಗೆಯ ಹಂತ ಹಂತಗಳನ್ನು ಗುರುತಿಸಿ, ಕನ್ನಡ ಭಾಷೆಯ ಬೆಳವಣಿಗೆಗೆ ಮತ್ತು ಹೊಸ ಹೊಸ ಅವಿಷ್ಕಾರಗಳಿಗೆ ಕೊಡುಗೆಗಳಾಗಿರುವ ಅಂಶವನ್ನು ವಿವರಿಸಿದರು. ಪ್ರತಿಕಾ ರಂಗವು ಪ್ರಜಾಪ್ರಭುತ್ವರ ವ್ಯವಸ್ಥೆಯಲ್ಲಿ ನಾಲ್ಕನೇ ಅಂಗವಾಗಿ ಪರಿಗಣಿಸಿದೆ. ವೃತ್ತ ಪತ್ರಿಕೆಗಳು ಇಂದಿಗೂ ಜನಜೀವನದ ಜೀವನಾಡಿಯಾಗಿವೆ. ಭಾಷೆಯು ಸಂವಹನ ಮಾಧ್ಯಮ– ಒಂದು ಕಡೆಯಿಂದ ಮತ್ತೊಂದೆಡೆಗೆ ಹರಿಯುವಾಗ ತನ್ನೊಂದಿಗೆ ಅರ್ಥವನ್ನೂ ಭಾವನೆಗಳನ್ನೂ ಬೇರೆಡೆಗೆ ತಲುಪಿಸುವ ಶಕ್ತಿಯಿದೆ. ಪ್ರಚಲಿತ ಆಧುನಿಕ ಸಂವಹನ ಮಾಧ್ಯಮಗಳಲ್ಲಿ ದೂರದರ್ಶನದಲ್ಲಿ ಬಿಂಬಿತವಾಗುವ ಕಾರ್ಯಕ್ರಮಗಳು, ಮೊಬೈಲ್‌ಗಳು, ಕಂಪ್ಯೂಟರ್‌ಗಳು ಮುಂತಾದವು ಬಹಳ ಶ್ರೀಘ್ರವಾಗಿ ಜನರನ್ನು, ಆಕರ್ಶಿಸಿ, ಪತ್ರಿಕಾರಂಗದಲ್ಲಿ ಒಂದು ಕ್ರಾಂತಿಯನ್ನುಂಟು ಮಾಡುತ್ತಿದೆ. ಇಂತಹ ಸಂದರ್ಭಗಳಲ್ಲಿ ಪತ್ರಕರ್ತರ, ಸಂಪಾದಕರ ಮತ್ತು ಇತರ ಹಂತಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪತ್ರಿಕೋದ್ಯಮದ ಸಿಬ್ಬಂದಿಗಳ ಮೇಲೆ ಬಹಳ ಒತ್ತಡದ ಸ್ಥಿತಿಯ ನಿರ್ಮಾಣದ ಬಗ್ಗೆ ಮಾಹತಿಯನ್ನು ಒದಗಿಸಿದರು. ಇಷ್ಟೆಲ್ಲಾ ನಡುವೆಯು ಕನ್ನಡ ಭಾಷೆಯ ಬೆಳವಣಿಗೆಗೆ ಉನ್ನತಿಯನ್ನು ಮತ್ತು ಜಾಚಿತ್ಯವನ್ನು ಕಾಪಾಡಿ ಕೊಂಡು ಬರುವ ಜವಾಬ್ದಾರಿಯು ಪತ್ರಿಕೋದ್ಯಮದ ಬಂಧುಗಳು ಮೇಲಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅವರು ಪ್ರತಿಷ್ಠಾನದ ಚಟುವಟಿಕೆಗಳ ಪರಿಚಯ ಮಾಡಿಕೊಟ್ಟರು.ಕಾರ್ಯಕ್ರಮವು ಪ್ರೊ.ಜಿ.ಅಬ್ದುಲ್ ಬಷೀರ್ ಅವರ ಸ್ವಾಗತದೊಂದಿಗೆ ಆರಂಭವಾಯಿತು. ಖಂಜಾಚಿ ಶ್ರೀರಾಮ್ ಪ್ರಸಾದ್ ಅವರು ವಂದನಾರ್ಪಣೆ ಮಾಡಿದರು.

## ಅಕ್ಕರಗೊಟ್ಟಿ



ದಿನಾಂಕ 13–04–2016 ರಂದು ನಡೆದ 'ಅಕ್ಕರಗೊಟ್ಟಿ' ಕಾರ್ಯಕ್ರಮದಲ್ಲಿ ಡಾ। ಪಿ. ವಿ. ನಾರಾಯಣ ಪಂಪನ 'ಆದಿಪುರಾಣ'ದ ಹದಿನೈದನೆಯ ಆಶ್ವಾಸದ ಹದಿನಾಲ್ಕನೆಯ ಪದ್ಯದಲ್ಲಿನ 'ಮನುಷ್ಯಜಾತಿ ತಾನೊಂದೆ ವಲಂ' ಎಂಬ ವಾಕ್ಯವನ್ನು ಕುರಿತು ಚಿಂತನೆ ನಡೆಸಿದರು. ಈಗ ಈ ವಾಕ್ಯವನ್ನು ಇಡೀ ಮನುಷ್ಯಸಂಕುಲಕ್ಕೆ ಅನ್ವಯಿಸುವ ಮಾತೆಂಬಂತೆ ಬಳಸಲಾಗುತ್ತಿದೆಯಾದರೂ, ಅದರ ಹಿನ್ನೆಲೆಯನ್ನು ಗಮನಿಸಿದರೆ ಅದರ ಅರ್ಥ ಸೀಮಿತವಾದುದು ಎಂದು ವಾದಿಸಿದರು. ಆದಿದೇವನು ಕ್ಷತ್ರಿಯ, ವೈಶ್ಯ ಮತ್ತು 'ಸ್ಪೃಶ್ಯಾಸ್ಪೃಶ್ಯಕಾರಕರುಮಪ್ಪ' ಶೂದ್ರ ಎಂಬ ಮೂರು ವರ್ಣಗಳನ್ನು ಸೃಷ್ಟಿಸಿದರೆ, ಅವನ ಮಗ ಭರತನು ನಾಲ್ಕನೆಯದಾಗಿ ತಾನು ಕೊಡುವ ದಾನಕ್ಕೆ ಯಾರು ಸತ್ಪಾತ್ರರು ಎಂದು ಕಂಡುಕೊಳ್ಳಲು ಒಂದು ಸಣ್ಣ ಪರೀಕ್ಷೆಯನ್ನೇರ್ಪಡಿಸಿ, ಅದರಲ್ಲಿ ತಮ್ಮ ಸೂಕ್ಷ್ಮಮತಿಯನ್ನು ಪ್ರಕಟಿಸಿದವರಿಗೆ ಒಂದರಿಂದ ಹನ್ನೊಂದು ಚಿನ್ನದ ಎಳೆಗಳ 'ಯಜ್ಞೋಪವೀತ'ಗಳನ್ನು ನೀಡಿದ್ದಲ್ಲದೆ, 'ಪೂಜೆ' 'ವಾರ್ತೆ' 'ದತ್ತಿ' 'ಸ್ವಾಧ್ಯಾಯ''ಸಂಯಮ' 'ತಪ' ಎಂಬ ಆರು'ವೃತ್ತಿ'ಗಳನ್ನು ಅವರಿಗೆ ನಿಗದಿಗೊಳಿಸುತ್ತಾನೆ. (ಇದು ವೈದಿಕ ಬ್ರಾಹ್ಮಣರ ಅಧ್ಯಯನ ಅಧ್ಯಾಪನ ಯಜನ ಯಾಜನ ದಾನ ಪ್ರತಿಗ್ರಹಗಳಿಗೆ ಭಿನ್ನವಾದುದು; ಇಲ್ಲಿನ ಬ್ರಾಹ್ಮಣರು ಜೈನ ಬ್ರಾಹ್ಮಣರು). ತನ್ನ ಕಾರ್ಯದ ಸಮರ್ಥನೆಗಾಗಿ ಅವನು ಈ ಆರು ವೃತ್ತಿಗಳ ಕಾರಣದಿಂದ ದ್ವಿಜರು ಭಿನ್ನರೇ ವಿನಾ ಮಿಕ್ಕಂತೆ, 'ಮನುಷ್ಯಜಾತಿ ತಾನೊಂದೆ ವಲಂ' ಎನ್ನುತ್ತಾನೆ.ಹಿಂದೆ ಆದಿದೇವನು ಮೂರು ವರ್ಣಳನ್ನು ಮಾಡಿದಾಗಲೂ, ಜನರಿಗೆ ಕೃಷಿಯ ಬಗ್ಗೆ ಹೇಳಿಕೊಟ್ಟಾಗಲೂ ಕೇವಲ ಸಸ್ಯಾಹಾರಿಗಳನ್ನು ಮಾತ್ರ ಗಮನಿಸುತ್ತಾನೆ. ಹೀಗಾಗಿ ಇಲ್ಲಿ 'ಮನುಷ್ಯ ಜಾತಿ' ಎಂಬ ಮಾತು ಕಢೇವಲ ಜೈನರಿಗೆ ಅನ್ವಯಿಸುವುದೇ ಹೊರತು ಆಧುನಿಕ ದೃಷ್ಟಿಯ ಇಡೀ ೩೦ಟಟ೩ ಚಿಔಜಟಿ ಅನ್ನು ಅಲ್ಲ. ಸಾಂಸ್ಥಿಕ ಧರ್ಮಗಳ ಸನ್ನಿವೇಶದಲ್ಲಿ ಬರುವ ಇಂತ ಮಾತುಗಳಿಗೆ ಬಹು ಸೀಮಿತ ಅರ್ಥವಿರುವುದೇ ಹೊರತು, ಇಡೀ ಮನುಸಂಕುಲವನ್ನು ಒಳಗೊಳ್ಳುವ ವ್ಯಾಪ್ತಿ ಅವಕ್ಕಿರುವುದಿಲ್ಲ ಎಂದು ಸ್ಪಷ್ಟಪಡಿಸಿದರು.

ಹೆಚ್ಚಿನ ಸಂಖ್ಯೆಯಲ್ಲಿ ಹಾಜರಿದ್ದ ಸಭೆಯಲ್ಲಿನಡೆದ ಚರ್ಚೆಯಲ್ಲಿ ಡಾ। ಆರ್. ಲಕ್ಷ್ಮೀನಾರಾಯಣ, ಪ್ರೊ. ಜಿ. ಅಶ್ವತ್ಥನಾರಾಯಣ ಶ್ರೀಮತಿ ನಳಿನಾ, ಡಾ। ನಳಿನೀ ವೆಂಕಟೇಶ್, ಶ್ರೀ ಗುರುಪ್ರಸಾದ್, ಪ್ರೊ. ಅಬ್ದುಲ್ ಬಶೀರ್, ಶ್ರೀ ಗುರುಪ್ರಸಾದ್, ಮುಂತಾದವರು ಭಾಗವಹಿಸಿದ್ದರು.

## ಡಾ. ವಿಜಯಾ ಸುಬ್ಬರಾಜ್ ದತ್ತಿ – ಗಣ್ಯಲೇಖಕಿ ಪ್ರಶಸ್ತಿ



ದಿನಾಂಕ 16–4–2016ರಂದು ಡಾ. ವಿಜಯಾ ಸುಬ್ಬರಾಜ್ ದತ್ತಿಯಡಿಯಲ್ಲಿ ಗಣ್ಯಲೇಖಕಿ ಪ್ರಶಸ್ತಿ ಯನ್ನು ಶ್ರೀಮತಿ ಎಚ್.ಎನ್. ಆರತಿ ಅವರಿಗೆ ಡಾ. ನಲ್ಲೂರು ಪ್ರಸಾದ್, ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು ಅವರು ಪ್ರಶಸ್ತಿ ಪ್ರದಾನ ಮಾಡಿದರು. ರೂ. ಹತ್ತು ಸಾವಿರ ನಗದು ಹಾಗೂ ಸ್ಮರಣಿಕೆಗಳನ್ನು ಒಳಗೊಂಡಿರುವ ಈ ಪ್ರಶಸ್ತಿಯನ್ನು ನಿವೃತ್ತ ಪ್ರಾಧ್ಯಾಪಕರು, ಪ್ರಸಿದ್ಧ ಲೇಖಕಿ ಹಾಗೂ ಪ್ರತಿಷ್ಠಾನದ ಸಂಯೋಜನಾಧಿಕಾರಿ ಡಾ. ವಿಜಯಾ ಸುಬ್ಬರಾಜ್ ಅವರು 2014 ರಲ್ಲಿ ಸ್ಥಾಪಿಸಿರುತ್ತಾರೆ. ಇದು ಎರಡನೆ ವರ್ಷ ನೀಡಿರುವ ಪ್ರಶಸ್ತಿಯಾಗಿರುತ್ತದೆ. ಗೌರವ ಕಾರ್ಯದರ್ಶಿ ಅಬ್ದುಲ್ ಬಶೀರ್ ಅವರು ಸ್ವಾಗತವನ್ನು ಕೋರಿದರು.ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅವರು ಪ್ರಾಸ್ತಾವಿಕ ನುಡಿಗಳನ್ನು ಆಡಿದರು. ಲೇಖಕಿ ಶ್ರೀಮತಿ ಮಮತಾ ಜಿ ಸಾಗರ್ ಅವರು ಪ್ರಶಸ್ತಿ ಪುರಸ್ಕೃತರ ಬಗ್ಗೆ ಹಾಗೂ ಕೃತಿಗಳ ವಿವರಗಳನ್ನು ನೀಡಿದರು. ಪ್ರಶಸ್ತಿಯನ್ನು ಸ್ವೀಕರಿಸಿದ ಶ್ರೀಮತಿ ಎಚ್.ಎನ್. ಆರತಿ ಅವರು ಆಧುನಿಕ ಜೀವನದಲ್ಲಿ ಹೊಸದಾಗಿ ಕಾಣಿಸಿಕೊಳ್ಳುತ್ತಿರುವ ತಲ್ಲಣಗಳ ಬಗ್ಗೆ ಆತಂಕ ವ್ಯಕ್ತಪಡಿಸಿದರು. ...6ನೇ ಪುಟಕ್ಕೆ

...5ನೇ ಪುಟದಿಂದ

ಶ್ರೀಮತಿ ಎಚ್.ಎನ್. ಆರತಿ ಅವರು ಹಾಗೂ ಶ್ರೀಮತಿ ಮಮತಾ ಜಿ ಸಾಗರ್ ಅವರು ಜೊತೆಗೂಡಿ ಶ್ರೀಮತಿ ಎಚ್.ಎನ್. ಆರತಿ ಅವರು ರಚಿಸಿರುವ "ಲಿಫ್ಟ್" ಕವನವನ್ನು ವಾಚಿಸಿದರು. ಡಾ. ನಲ್ಲೂರು ಪ್ರಸಾದ್ ಅವರು ಶ್ರೀಮತಿ ಆರತಿ ಅವರ ಸಾಧನೆಗಳ ಬಗ್ಗೆ ಮೆಚ್ಚುಗೆ ಸೂಚಿಸಿ ಸಮಾಜದಲ್ಲಿನ ಇತ್ತೀಚಿನ ಅನಾರೋಗ್ಯಕರ ಬೆಳವಣಿಗೆಗಳಬಗ್ಗೆ ಬೇಸರ ವ್ಯಕ್ತಪಡಿಸಿದರು. ಈ ಕಾರ್ಯಕ್ರಮದಲ್ಲಿ ಡಾ. ಹಂಪ ನಾಗರಾಜಯ್ಯ, ಡಾ. ಕಮಲಾ ಹಂಪನಾ ಒಳಗೊಂಡಂತೆ ಹಲವು ವಿದ್ವಾಂಸರು ಭಾಗವಹಿಸಿದ್ದರು.

## ಕಿರು ಪರಿಚಯ

## ಡಾ. ವಿಜಯಾ ಸುಬ್ಬರಾಜ್



ವಿದ್ಯಾರ್ಹತೆ: ಬಿಎಸ್ ಸಿ, ಎಂ ಎ,, ಪಿಹೆಚ್ ಡಿ ಎಂ ಎ(ಇಂಗ್ಲೀಷ್), ಎಲ್.ಎಲ್.ಬಿ, ಫ್ರೆಂಚ್ ಭಾಷೆಯಲ್ಲಿ ಡಿಪ್ಲೋಮಾ, ಸಾಹಿತ್ಯ ರತ್ನ(ಹಿಂದಿ)

ವೃತ್ತಿ: ಪ್ರಾಧ್ಯಾಪಕರು(ನಿವೃತ್ತ), ಎಂ. ಇ. ಎಸ್, ಕಾಲೇಜು, ಬೆಂಗಳೂರು

ಹಲವಾರು ಕಾಲೇಜುಗಳು ಹಾಗೂ ಶೈಕ್ಷಣಿಕ ಸಂಸ್ಥೆಗಳಿಗೆ ಅತಿಥಿ ಪ್ರಾಧ್ಯಾಪಕರು

ಪ್ರಕಟಿತ ಕೃತಿಗಳು: 12 ಕವನ ಸಂಕಲನಗಳು, 9 ಕಾದಂಬರಿಗಳು, 7 ಸಣ್ಣಕಥೆಗಳ ಸಂಕಲನಗಳು, 8 ವಿಮರ್ಶಾ ಕೃತಿಗಳು, 11 ಜೀವನ ಚರಿತ್ರೆಗಳು, 14 ನಾಟಕಗಳು, 2 ಮಕ್ಕಳ ಕಾದಂಬರಿಗಳು, 14 ರೇಡಿಯೋ ಲೇಖನಗಳು, ನೂರಾರು ಬಿಡಿ ಲೇಖನಗಳು,

ಪುರಸ್ಕಾರಗಳು: ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನೂ ಒಳಗೊಂಡಂತೆ 26ಕ್ಕೂ ಹೆಚ್ಚು ಪ್ರಶಸ್ತಿ ಪುರಸ್ಕಾರಗಳು,

ಹಲವಾರು ತಜ್ಞರ ಸಮಿತಿಗಳ ಸದಸ್ಯರು, ಅಧ್ಯಕ್ಷರು

ಹಲವಾರು ಸಂಘ ಸಂಸ್ಥೆಗಳಲ್ಲಿ ಹಾಲಿ ಹಾಗೂ ಮಾಜಿ ಪದಾಧಿಕಾರಿ

ರೂ. ಹತ್ತು ಸಾವಿರ ನಗದು ಹಾಗೂ ಸ್ಮರಣಿಕೆಗಳನ್ನು ಒಳಗೊಂಡಿರುವ ಈ ಪ್ರಶಸ್ತಿಯನ್ನು ಪ್ರತಿಷ್ಠಾನದ ಸಂಯೋಜನಾಧಿಕಾರಿ ಡಾ. ವಿಜಯಾ ಸುಬ್ಬರಾಜ್ ಅವರು 2014 ರಲ್ಲಿ ರೂ. ಎರಡು ಲಕ್ಷಗಳ ದತ್ತಿಯನ್ನು, ಪ್ರತಿ ವರ್ಷ ತಮ್ಮ ಹೆಸರಿನಲ್ಲಿ "ಗಣ್ಯ ಲೇಖಕಿ" ಪುರಸ್ಕಾರವನ್ನು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಗಣನೀಯ ಸೇವೆ ನೀಡಿರುವ ಲೇಖಕಿಗೆ ನೀಡಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುತ್ತಾರೆ.

## ಶ್ರೀಮತಿ ಹೆಚ್.ಎನ್. ಆರತಿ



ವಿದ್ಯಾರ್ಹತೆ: ಎಂ.ಎ., ಎಂ.ಎಸ್. (ಕಮ್ಯುನಿಕೇಶನ್ಸ್) ನಾಲ್ಕು ಚಿನ್ನದ ಪದಕಗಳನ್ನು ಗಳಿಸಿದ್ದಾರೆ

ವೃತ್ತಿ: ಬೆಂಗಳೂರು ದೂರದರ್ಶನ ಕೇಂದ್ರದಲ್ಲಿ ಹಿರಿಯ ನಿರ್ಮಾಪಕಿ

ಪ್ರಕಟಿತ ಕೃತಿಗಳು: ಎರಡು ಕವನ ಸಂಕಲನಗಳು, ಒಂದು ನಾಟಕ ಹಾಗೂ ಎರಡು ಅನುವಾದಗಳು

ಅನೇಕ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಕವಿ ಸಮ್ಮೇಳನಗಳಲ್ಲಿ ಭಾಗವಹಿಸಿದ್ದಾರೆ

ಪುರಸ್ಕಾರಗಳು:Advertising and Media Award 2015 ಒಳಗೊಂಡಂತೆ ಹಲವಾರು ಪ್ರಶಸ್ತಿ ಪುರಸ್ಕಾರಗಳು,

## "ಸಂಶೋಧನ ದಿನ".

18-4-2016ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಪ್ರತಿ ವರ್ಷ ಆಚರಿಸುವ "ಸಂಶೋಧನ ದಿನ"ವನ್ನು ನಡೆಸಲಾಯಿತು. ಮೂರು ವಿದ್ಯಾರ್ಥಿಗಳಿಗೆ ಪಿ. ಎಚ್. ಡಿ. ಪದವಿ ಹಾಗೂ ಎಂಟು ವಿದ್ಯಾರ್ಥಿಗಳಿಗೆ ಎಂ.ಫಿಲ್ ಪದವಿಗಳನ್ನು ಡಾ. ಹಿ.ಚಿ. ಬೋರಲಿಂಗಯ್ಯ ಅವರು ಪ್ರದಾನ ಮಾಡಿದರು. ಗೌರವ ಕಾರ್ಯದರ್ಶಿ ಅಬ್ದುಲ್ ಬಶೀರ್ ಅವರು ಸ್ವಾಗತವನ್ನು ಕೋರಿದರು. ಪ್ರತಿಷ್ಠಾನದ ಸಂಯೋಜನಾಧಿಕಾರಿ ಡಾ. ವಿಜಯಾ ಸುಬ್ಬರಾಜ್ ಅವರು ಪ್ರಾಸ್ತಾವಿಕ ನುಡಿಗಳನ್ನು ಆಡಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಶೈಕ್ಷಣಿಕ ಚಟುವಟಿಕೆಗಳ ಬಗ್ಗೆ ವಿವರಗಳನ್ನು ನೀಡಿದರು. ಪದವಿಗಳನ್ನು ಪ್ರದಾನ ಮಾಡಿದ ಡಾ. ಹಿ.ಚಿ. ಬೋರಲಿಂಗಯ್ಯ ಅವರು ಮಾತನಾಡಿ ಇಂದಿನ ಸಂಶೋಧನೆಗಳ ಗುಣಮಟ್ಟ ಕುಸಿಯುತ್ತಿರುವ ಬಗ್ಗೆ ಆತಂಕ ವ್ಯಕ್ತಪಡಿಸಿದರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಶೈಕ್ಷಣಿಕ ಚಟುವಟಿಕೆಗಳ ಬಗ್ಗೆ ಮೆಚ್ಚುಗೆಯ ಮಾತುಗಳನ್ನಾಡಿದರು.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಮಾತನಾಡಿ ಸಾವಿರಾರು ವಿದ್ಯಾರ್ಥಿಗಳು ಪಿ.ಹೆಚ್. ಡಿ. ಹಾಗೂ ಎಂಫಿಲ್ ಪದವಿಗಳನ್ನು ಪಡೆಯುವ ಆಸಕ್ತಿ ವಹಿಸುತ್ತಿರುವಾಗ ಕನ್ನಡ ವಿಶ್ವವಿದ್ಯಾಲಯ ಹಾಗೂ ಇತರ ವಿಶ್ವವಿದ್ಯಾಲಯಗಳು ತಮ್ಮ ನಿಯಮಗಳನ್ನು ಮಾರ್ಪಡಿಸಿ ಸೂಕ್ತ ಅನುಕೂಲ ಮಾಡಿಕೊಡಬೇಕೆಂದು ಅಭಿಪ್ರಾಯಪಟ್ಟರು. ಗೌರವ ಕೋಶಾಧಿಕಾರಿ ಶ್ರೀ ಎಂ.ಎಸ್. ರಾಮಪ್ರಸಾದ್ ಅವರು ವಂದನಾರ್ಪಣೆ ಮಾಡಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವತಿಯಿಂದ ಪದವಿಗಳನ್ನು ಪಡೆದುಕೊಂಡಿರುವ ಹಿಂದಿನ ವಿದ್ಯಾರ್ಥಿಗಳು ಹಳೇ ವಿದ್ಯಾರ್ಥಿಗಳ ಸಂಘವನ್ನು ಸ್ಥಾಪಿಸಿ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಚಟುವಟಿಕೆಗಳಿಗೆ ಬೆಂಬಲ ನೀಡಬೇಕೆಂದು ಕೋರಿದರು.



ಈ ವರ್ಷದಲ್ಲಿ ಪಿಹೆಚ್ ಡಿ ಪಡೆದ ವಿದ್ಯಾರ್ಥಿಗಳು 2008 –09ನೇ ಸಾಲಿನಲ್ಲಿ ಪಿಎಚ್.ಡಿ ಪದವಿಗಾಗಿ ಅರ್ಜಿ ಸಲ್ಲಿಸಿ ಆಯ್ಕೆಗೊಂಡಿದ್ದರು. ಆ ವರ್ಷ ಐದು ಜನ ವಿದ್ಯಾರ್ಥಿಗಳಿಗೆ ಕನ್ನಡ ವಿಶ್ವವಿದ್ಯಾಲಯದಿಂದ ಖಾಯಂ ನೋಂದಣಿ ದೊರಕಿತ್ತು.ಇಬ್ಬರು ವಿದ್ಯಾರ್ಥಿಗಳು ತಮ್ಮ ವೈಯಕ್ತಿಕ ಕಾರಣಗಳಿಂದ ಪದವಿಯ ಷರತ್ತುಗಳನ್ನು ಪಾಲಿಸದೆ ಮುಂದುವರೆಸಿರುವುದಿಲ್ಲ. ಪದವಿ ಪಡೆದ ವಿದ್ಯಾರ್ಥಿಗಳ ವಿವರಗಳು ಈ ಕೆಳಗಿನಂತಿವೆ:

| ಹೆಸರು | ವಿಷಯ | ಮಾರ್ಗದರ್ಶಕರು |
|---|---|---|
| ಡಾ॥ ಕೆ.ಎಂ. ಸುರೇಶ | ಐಕನಹಳ್ಳಿ: ಒಂದು ಸಾಂಸ್ಕೃತಿಕ ಅಧ್ಯಯನ | ಡಾ॥ ಎಸ್ ಪ್ರಸಾದ್ ಸ್ವಾಮಿ |
| ಡಾ॥ ವಾಣಿಶ್ರೀ.ಬಿ.ಎಂ | ಕನ್ನಡಮಹಿಳಾ ಹರಿದಾಸರು ಒಂದು ಅಧ್ಯಯನ | ಡಾ॥ ಅನಂತ ಪದ್ಮನಾಭರಾವ್ |
| ಡಾ॥ ಶೈಲಜ ಎ.ಬಿ. | ಸಾದರು: ಒಂದು ಸಾಂಸ್ಕೃತಿಕ ಅಧ್ಯಯನ | ಡಾ॥ಆರ್. ಲಕ್ಷ್ಮೀನಾರಾಯಣ |

## ವಚನ ವಿಹಾರ – ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ

21–04–2016 ವಚನ ವಿಹಾರ ಸಾಕ್ಷ್ಯ ಚಿತ್ರಗಳಲ್ಲಿಅಕ್ಕ ಮಹಾದೇವಿಯ ವಚನಗಳ ಗಾಯನ ಮತ್ತು ವ್ಯಾಖ್ಯಾನಗಳನ್ನು ಒಳಗೊಂಡಿರುವ ವಿಡಿಯೋ ಚಿತ್ರಗಳ ಪ್ರದರ್ಶನ ನಡೆಯಿತು. ಸುಮಾರು ಒಂದು ಗಂಟೆಯ ಈ ಸಂಗೀತಮಯ ಕಾರ್ಯಕ್ರಮದಲ್ಲಿ ವಚನ ಚಳುವಳಿ ಬಗ್ಗೆ ಬಹಳ ರಸವತ್ತಾಗಿ ವಿವರಿಸಲಾಗಿದ್ದು ಜೊತೆಗೆ ವಚನಗಳನ್ನು ಪ್ರಸಿದ್ಧ ಗಾಯಕರು ಇಂಪಾಗಿ ಹಾಡಿರುವ ಭಾಗಗಳೂ ಇದ್ದು ಅಧಿಕ ಸಂಖ್ಯೆಯಲ್ಲಿ ಹಾಜರಿದ್ದ ಸಭಿಕರಿಗೆ ಹೊಸ ಅನುಭವವನ್ನು ತಂದುಕೊಟ್ಟಿತು.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರಕಟಿಸಿರುವ ಪುಸ್ತಕದ ಪರಿಚಯ




ಪುಟಗಳು :604

ಬೆಲೆ : ರೂ. 400/–

ಕಾಗದ: 70 ಜಿಎಸ್ ಎಂ ಮ್ಯಾಪ್ ಲಿಥೊ

ಸಂಪಾದಕರು: ಪ್ರೊ. ಜಿ. ಅಶ್ವತ್ಥ ನಾರಾಯಣ

**ಕೃತಿಯನ್ನು ಕುರಿತು**

ಎಂ.ವಿ.ಸೀತಾರಾಮಯ್ಯ (ಪದ್ಯಾನುವಾದಕರು) ಅವರು ಕನ್ನಡದ ಪ್ರತಿಭಾವಂತ ನವೋದಯ ಕವಿಗಳಲ್ಲಿ ಒಬ್ಬರು, ಸಾಹಿತಿಗಳು, ವಿದ್ವಾಂಸರು ಆದ ಇವರು ಶ್ರೀ ವಿಜಯಕೃತ ಕವಿರಾಜಮಾರ್ಗ, ಉದಯಾದಿತ್ಯಾಲಂಕಾರ ಮೊದಲಾದ ಗ್ರಂಥಗಳನ್ನು ವಿದ್ವತ್ಪೂರ್ಣವಾಗಿ ಸಂಪಾದಿಸಿದ್ದಾರೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವೆಂಬ ಸಂಶೋಧನ ಸಂಸ್ಥೆಯನ್ನು ಸ್ಥಾಪಿಸಿ ಲೋಚನ ಎಂಬ ವಿದ್ವತ್ ಪತ್ರಿಕೆ ನಡೆಸಿ, ಅಪೂರ್ವ ಹಸ್ತಪ್ರತಿಭಂಡಾರ ಸ್ಥಾಪಿಸಿ ಸಂಶೋಧನ ಕ್ಷೇತ್ರಕ್ಕೆ ಮೌಲಿಕ ಕೊಡುಗೆಗಳನ್ನು ನೀಡಿದ್ದಾರೆ.ನೂರಾರು ಗ್ರಂಥಗಳನ್ನು ರಚಿಸಿ ವಿಮರ್ಶೆ, ಕಾವ್ಯ, ಕಥೆ ಕಾದಂಬರಿ, ಗ್ರಂಥಸಂಪಾದನೆ ಇತ್ಯಾದಿ ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವ ಇವರ ಅಪ್ರಕಟಿತ ಸೌಂದರ್ಯಲಹರಿಯ ಕನ್ನಡ ಪದ್ಯಾನುವಾದ ಇದೀಗ ಪ್ರಕಟವಾಗುತ್ತಿದೆ.

ಬಿ.ಎಸ್. ಕಪನೀಪತಯ್ಯ (ಟೀಕಾಕರರು) ಅವರು ನಾಲ್ವಡಿಕೃಷ್ಣರಾಜ ಒಡೆಯರ ಕಾಲದಲ್ಲಿ ಅರಮನೆಯ ಕಚೇರಿ ವ್ಯವಸ್ಥಾಕರಾಗಿ ಸೇವೆ ಸಲ್ಲಿಸಿದ ಸಂಸ್ಕೃತ ಮತ್ತು ಕನ್ನಡ ವಿದ್ವಾಂಸರು.ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರ ಪ್ರೀತಿವಿಶ್ವಾಸಗಳಿಗೆ ಪಾತ್ರರಾದರು.ಅನೇಕ ಸಂಘ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ಶ್ರೀ ರಾಮತತ್ತ್ವ ಪರಾಯಣ, ಗುರುಭಕ್ತಪ್ರಿಯ ಮೊದಲಾದ ಪ್ರಶಸ್ತಿಗಳನ್ನು ಪಡೆದು ಆದಿಶಂಕರ ಸ್ತೋತ್ರ ಸಾಹಿತ್ಯಕ್ಕೆ ಕನ್ನಡದಲ್ಲಿ ಟೀಕೆ ಬರೆದ ಅವರು ಸೌಂದರ್ಯಲಹರೀ ಸ್ತೋತ್ರ ರತ್ನಕ್ಕೆ ಅಮೋಘಟೀಕೆ ಬರೆದಿದ್ದಾರೆ.ಇದುವರೆಗೆ ಅಪ್ರಕಟಿತವಾದ ಈ ಸ್ತೋತ್ರಟೀಕೆ ಈಗ ಪ್ರಕಟವಾಗುತ್ತಿದೆ.

ಪ್ರೊ|| ಜಿ. ಅಶ್ವತ್ಥನಾರಾಯಣ (ಗ್ರಂಥ ಸಂಪಾದಕರು) ಇವರು ಈಗಾಗಲೇ ವಿಜಯದಾಸರ ಕೀರ್ತನೆಗಳು ಮತ್ತು ಉಗಾಭೋಗಗಳು ಮತ್ತು ಪ್ರಸನ್ನ ಶ್ರೀನಿವಾಸ ದಾಸರ ಸಮಗ್ರಕೃತಿಗಳು, ಮಹಲಿಂಗರಂಗನ ಅನುಭವಾಮೃತ(ಟೀಕೆ), ಎಂ.ವಿ.ಸೀ. ಅವರ ಅನುವಾದಿತ ಸಮಗ್ರ ಜೀವನ ಚರಿತ್ರೆಗಳು ಮತ್ತು ಕಾದಂಬರಿಗಳು ಇತ್ಯಾದಿ ಗ್ರಂಥಗಳನ್ನು ಸಂಪಾದಿಸಿದ್ದಾರೆ. ಇದೀಗ ಸೌಂದರ್ಯಲಹರೀ ಸ್ತೋತ್ರದ ಬಗ್ಗೆ ಕಪನೀಪತಯ್ಯನವರು ಬರೆದ ಟೀಕೆ ಮತ್ತು ಎಂ.ವಿ.ಸೀ ಅವರು ರಚಿಸಿದ ಪದ್ಯಾನುವಾದ ಅಪ್ರಕಟಿತ ಹಸ್ತಪ್ರತಿಗಳನ್ನು ಪರಿಷ್ಕರಿಸಿ ಸಂಪಾದಿಸಿದ್ದಾರೆ. ಕಪನೀಪತಯ್ಯನವರ ಸೌಂದರ್ಯಲಹರೀ ಟೀಕೆಯನ್ನು ಮೂಲ–ಪಾಠಾಂತರ–ಪದವಿಭಾಗ– ಪೂರ್ಣವಾಗಿ ಸಂಪಾದಿಸಿದ್ದಾರೆ. ಸೌಂದರ್ಯಲಹರೀ ಸ್ತೋತ್ರ ಕನ್ನಡದಲ್ಲಿ ಇಷ್ಟೊಂದು ವಿವರಣೆಗಳೊಡನೆ ಪ್ರಕಟವಾಗುತ್ತಿರುವುದು ಇದೇ ಮೊದಲು.

# ಅಭಿನಂದನೆಗಳು



ಕರ್ನಾಟಕ ಸಾಹಿತ್ಯ ಅಕಾಡೆಮಿಯ 2013ರ ಅತ್ಯುತ್ತಮ ಸೃಜನಶೀಲ ಅನುವಾದ ಪ್ರಶಸ್ತಿಯನ್ನು ಡಾ. ಆರ್.ಲಕ್ಷ್ಮೀನಾರಾಯಣ ಅವರ ಅನುವಾದಿತ ಕಾದಂಬರಿ "ಬೇಗುದಿ"ಗೆ ನೀಡಲಾಗಿರುತ್ತದೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರು ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಲ್ಲಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ವಿದ್ವಾಂಸರಾದ ಡಾ. ಆರ್.ಲಕ್ಷ್ಮೀನಾರಾಯಣ ಅವರಿಗೆ ಹೊಂಗನಸು ಅಭಿನಂದನೆಗಳನ್ನು ಸಲ್ಲಿಸುತ್ತದೆ.

## ಪ್ರೊ.ಜಿ ಅಬ್ದುಲ್ ಬಷೀರ್



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಕಾರ್ಯದರ್ಶಿಗಳೂ, ಖ್ಯಾತ ಸಾಹಿತಿಗಳೂ ಹಿರಿಯ ಸಂಸ್ಕೃತಿ ಚಿಂತಕರೂ ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ ಹೊರತರುತ್ತಿರುವ 'ಕರ್ನಾಟಕ ಲೋಚನ' ಎಂಬ ಷಾಣ್ಮಾಸಿಕ ವಿದ್ವತ್ ಪತ್ರಿಕೆಯ ಮಾಜಿ ಸಂಪಾದಕರೂ ಆದ ಪ್ರೊ. ಜಿ. ಅಬ್ದುಲ್ ಬಷೀರ್ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ ಸಂಪಾದಕರಾಗಿ ನೇಮಕ ಗೊಂಡಿದ್ದಾರೆ.'ಹೊಂಗನಸು' ಪ್ರೊ. ಜಿ.ಅಬ್ದುಲ್ ಬಷೀರ್ ಅವರಿಗೆ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

## ಶ್ರೀ ಚನ್ನೇಗೌಡ



ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯಉದ್ಯೋಗಿ, ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ಕನ್ನಡ ಕ್ರಿಯಾ ಸಮಿತಿಯ ಸಂಸ್ಥಾಪಕರಲ್ಲೊಬ್ಬರಾಗಿ, ಪ್ರಧಾನ ಕಾರ್ಯದರ್ಶಿಯಾಗಿದ್ದು ಸಂಘಟನೆಯನ್ನು ಕ್ರಿಯಾಶೀಲವಾಗಿ ಮುನ್ನಡೆಸಿ ಅದರ ಅಧ್ಯಕ್ಷರಾಗಿರುವವರೂ ಕನ್ನಡ ನಾಡು– ನುಡಿ–ಸಾಹಿತ್ಯಗಳ ಅಭಿವೃದ್ಧಿಗಾಗಿ ಸದಾಕಾಲ ದುಡಿಯುತ್ತಿರುವವರೂ ಅನೇಕ ಪ್ರಶಸ್ತಿ–ಪುರಸ್ಕಾರಗಳನ್ನು ಪಡೆದವರೂ ಆದ ಸನ್ಮಾನ್ಯ ಶ್ರೀ ವ.ಚ. ಚನ್ನೇಗೌಡ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿ ನೇಮಕ ಗೊಂಡಿದ್ದಾರೆ. ಶ್ರೀ ಚನ್ನೇಗೌಡ ಅವರಿಗೆ ಹೊಂಗನಸು ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

## ಕೆ. ರಾಜಕುಮಾರ್



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಆಜೀವ ಸದಸ್ಯರೂ ಕನ್ನಡ ಪರ ಚಿಂತಕರೂ ಖ್ಯಾತ ಲೇಖಕರೂ ಆದ ಶ್ರೀ ಕೆ.ರಾಜಕುಮಾರ್ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಸಂಶೋಧನೆ ಮತ್ತು ತರಬೇತಿ ಕೇಂದ್ರದ ಸಂಚಾಲಕರಾಗಿ ನೇಮಕ ಗೊಂಡಿದ್ದಾರೆ.'ಹೊಂಗನಸು' ಶ್ರೀಯುತರಿಗೆ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

–ಡಾ.ಪಿ.ವಿ. ನಾರಾಯಣ

ಎದೆ: ಇದು ಹಳಗನ್ನಡದಲ್ಲಿ ಮೊದಲು 'ಎೞ್ದೆ' ಎಂದಿದ್ದು ("ಎಲೆ ಚೋಳಕ್ಷಿತಿಪಾಳ ಸನ್ತವೆೞ್ದೆಯಂ ನೀಂ ನೀವಿಕೊಳ್" – ಕ್ರಿಶ. 560 ರ ಒಂದು ಶಾಸನ) ಆನಂತರ 'ಏರ್ದೆ' ಎಂದಾಯಿತು. ಇದು ಸಂಸ್ಕೃತದ ಹೃದಯ ಶಬ್ದದ ತದ್ಭವವೆಂದು ಭಾವಿಸಲಾಗಿದೆ. ಇದಕ್ಕೆ ಹೃದಯ ("ಮಲಯಾನಿಲನುಂ .. .. ಶಶಿಕಿರಣಮುಂ ವಿಯೋಗಿಗಳೆರ್ದೆಯೊಳ್ ನೆಲಸಿರ್ದುವು" – 'ಕವಿರಾಜಮಾರ್ಗ') ಹಾಗೂ ಮೊಲೆ ("ನಿನ್ನಾಗಮನಕ್ಕಾಗಿ ನೋಂತಿಹರ್ ಶಿಶುವಜ್ರಾರಿಗೆರ್ದೆಗೊಡದೆ" – 'ಶ್ರೀ ರಾಮಾಯಣ ದರ್ಶನಂ') ಎಂಬ ಅರ್ಥಗಳಿವೆ. 'ಎರ್ದೆಗೊಳ್' ಎಂಬ ರೂಪವು ಆಕರ್ಷಕವಾಗು ಎಂಬರ್ಥದಲ್ಲಿ 'ಪಂಪಭಾರತ'ದಲ್ಲಿ ಉಕ್ತಗೊಂಡಿದೆ ("ಏನೆರ್ದೆಗೊಂಡು ಬೇಟದತ್ತಳಗಮಂ ಉಂಟುಮಾಡಿದುದೋ"). 'ಎರ್ದೆಗಿಡು' ಎಂಬುದು ಧೈರ್ಯಗುಂದು ಎಂಬರ್ಥದಲ್ಲಿ "ಆದಿಪುರಾಣ'ದಲ್ಲಿ "ಪಡೆಗುಳ್ಕಂ ಪಡೆವಹೀಂದ್ರರ್ ಎರ್ದೆಗಿಡುವಿನೆಗಂ" ಎಂಬಲ್ಲಿ ಪ್ರಯೋಗಗೊಂಡಿದೆ. 'ಎರ್ದೆಯೊಡೆ ಎಂದರೂ ಇದೇ ಅರ್ಥ ("ಮರಣದಿನಾದ ಖೇದದಿಂದ ಎರ್ದೆಯೊಡೆದಂತಿರೆ" – 'ಪಂಪರಾಮಾಯಣ'). 'ಎರ್ದೆದೋಱು' ಎಂದರೆ ಧೈರ್ಯತೋರಿಸು ಎಂದು ("ಬಲ್ಪುದೋಱುವ ಎರ್ದೆದೋಱುವ ಕಯ್ಪಸರಂಗಳ್" – 'ಪಂಪಭಾರತ'); 'ಎರ್ದೆಮುಟ್ಟು'ವಿನ ಅರ್ಥ ಎದೆಯಾಳದಿಂದ ಎಂದರ್ಥ ("ಎರ್ದೆಮುಟ್ಟೆ ಕೂರ್ತನೊಳನೇ ಕರ್ಣಂಗೆ ದುರ್ಯೋಧನಂ" – ಅದೇ).ಇದೇ ಅರ್ಥ 'ಎರ್ದೆವುಗು' ಎಂಬ ಮಾತಿಗೂ ಇದೆ ("ತಳ್ತೆಸೆವ ರನ್ನದಂತೆ ಎರ್ದೆವುಗದೇ" – 'ಕಬ್ಬಿಗರ ಕಾವ').'ಎರ್ದೆಯಾರು' ಎಂದರೆ ಹೃದಯಕ್ಕೆ ತೃಪ್ತಿಯಾಗುವಂತೆ ("ಭೂಪ ಕುಸುಮಾಯುಧಂ ಇಂತೆರ್ದೆಯಾರೆ ನೋಡಿದಂ" – 'ಕುಸುಮಾವಳಿ ಕಾವ್ಯ').'ಎರ್ದೆಯಾಣ್ಮ' ಎಂದರೆ ಪ್ರಿಯಕರ ("ಇಚ್ಛೆಯಾಣ್ಮನೆಲ್ಲಿದಂ ಎರ್ದೆಯಾಣ್ಮನೆನ್ನರಸಂ" – 'ಆದಿಪುರಾಣ').'ಎಂಟೆರ್ದೆ' ಎಂದರೆ ಧೈರ್ಯ ("ಉರ್ಬಿನೊಳಾಂತು ಸೆಣಸಿ ಕಾದುವ ಜನಪಂಗೆ ಎಂಟೆರ್ದೆಯೇ" – 'ಧರ್ಮಾಮೃತ').'ಎರ್ದೆಯೆಱಕ' ಎಂದರೆ ಪ್ರೀತಿ ("ಎರ್ದೆಯೆಱಕದೆ ಪೊಗೞ್ದುಖಿಳ ಭುವನಜನನಿಯನಾಗಳ್" – 'ಆದಿಪುರಾಣ'); 'ಎರ್ದೆವಟಿಲ್' ಎಂದರೆ ದುಃಖ (ಉಪದೇಶಂಗೆಯ್ವುದ್ದ ಕಳೆದಂ ಅವರೆರ್ದೆವಟಿಲಂ" – 'ಪಂಪರಾಮಾಯಣ').'ಎದೆಗುದಿಪ' ಎಂದರೆ ಹೃದಯವೇದನೆ ("ಎದೆಗುದಿಪಮಂ ಒದವಿಸುವೊಡೆ ಆರೊ ಬಾರಿಪರ್" – 'ಲೀಲಾವತಿ'). ಹೀಗೆ ಅಸಂಖ್ಯಾತ ನುಡುಟ್ಟುಗಳು 'ಎದೆ'ಯಿಂದ ಸೃಷ್ಟಿತವಾಗಿವೆ. 'ಎದೆ' ರೂಪದೊಡನೆ ಇವೆಲ್ಲ ಇವತ್ತಿಗೂ ಬಳಕೆಯಲ್ಲಿವೆ.

* * *

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2015-2017
Office of Posting: Bangalore PSO, Bangalore 560026
Price :Annual Subscription Rs. 20/-
Date of Posting :29-04-2016

## ಸದಸ್ಯರ ಗಮನಕ್ಕೆ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಎಲ್ಲಾ ಸದಸ್ಯರ ವಿಳಾಸಗಳನ್ನು ಖಚಿತಪಡಿಸಿಕೊಂಡು ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ಪರಿಷ್ಕೃತ ವಿಳಾಸ ಮಾಹಿತಿಗಳನ್ನು ಡಿಜಿಟಲೀಕರಿಸುವ ಕೆಲಸವನ್ನು ಪ್ರಾರಂಭ ಮಾಡಿರುತ್ತದೆ. ಇದರಿಂದ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಹೆಚ್ಚಿನ ದಕ್ಷತೆ ಹಾಗೂ ಮಿತವ್ಯಯ ಸಾಧಿಸಲು ಸಾಧ್ಯವಿರುತ್ತದೆ.ಪ್ರತಿಷ್ಠಾನದ ಎಲ್ಲಾ ಸದಸ್ಯರೂ ತಮ್ಮ ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ವಿಳಾಸಗಳನ್ನು ಪತಿಷಾನದ ಕಚೇರಿಗೆ ತಲುಪಿಸಬೇಕೆಂದು ಕೋರುತೇವೆ:

## 2016 ಏಪ್ರಿಲ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷಣಾ ಕಾರ್ಯವು ನಡೆಯುತಿದೆ. 2016ರ ಏಪ್ರಿಲ್ ತಿಂಗಳಿನಲ್ಲಿ 25ಗ್ರಂಥಗಳ ಶುಷ್ಕ ಶುದ್ದೀಕರಣ, 25ಗ್ರಂಥಗಳಿಗೆ ತೈಲ/ಮಸಿ ಲೇಪನ ಕಾರ್ಯ, 25 ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, 16 ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, 8 ಗ್ರಂಥಗಳಿಗೆ ಬಟ್ಟೆಕಟ್ಟುವ ಕಾರ್ಯ, ಹಾಗೂ 23 ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ.

ಹೊರಗಿನಿಂದ ಬಂದ ಎರಡು ತಾಳೆಗರಿಗ್ರಂಥಗಳನ್ನು ಸಂರಕ್ಷಿಸಿ ಸೂಚಿ ಸಹಿತವಾಗಿ ಗ್ರಂಥನೀಡಿದವರಿಗೆ ಹಿಂದಿರುಗಿಸಲಾಗಿದೆ.

ನಮ್ಮ ಸದಸ್ಯರಾದ ಶ್ರೀ ನರಸಿಂಹಮೂರ್ತಿಅವರು ವೃತ್ತಿಯಲ್ಲಿ ಲೆಕ್ಕ ಪರಿಶೋಧಕರು.ಅವರು ಸ್ವಯಂ ಪ್ರೇರಿತರಾಗಿ ನಮ್ಮ ಹಸ್ತಪ್ರತಿವಿಭಾಗದಲ್ಲಿ ದಾಖಲಾಗಿರುವ ಕಾಗದದ ಹಸ್ತಪ್ರತಿಗಳನ್ನು ಸ್ವಚ್ಛಗೊಳಿಸಿ, ಡಿಜಿಟಲೀಕರಣ ಕಾರ್ಯವನ್ನು ಮಾರ್ಚ್2016ರಿಂದ ನಿರ್ವಹಿಸುತ್ತಿದ್ದಾರೆ.ಕಾಗದದ ಹಸ್ತಪ್ರತಿಗಳ ಸ್ವಚ್ಛತಾ ಕಾರ್ಯ ಮುಗಿದಿದೆ. ಇದುವರೆಗೂ 150 ಕಾಗದ ಹಸ್ತಪ್ರತಿಗಳ ಸಂರಕ್ಷಣಾ ಮತ್ತು ಡಿಜಿಟಲೀಕರಣ ಕಾರ್ಯವನ್ನು ಮುಗಿಸಿದ್ದಾರೆ.

ಪ್ರತಿಷ್ಠಾನವು ಓಲೆಗರಿಗಳ ಮತ್ತು ಕಾಗದ ಹಸ್ತಪ್ರತಿಗಳ ಸಂರಕ್ಷಣೆ ಮತ್ತು ದಾಖಲೀಕರಣದ ಕಾರ್ಯವನ್ನು ನಿರ್ವಹಿಸುತ್ತಿದೆ. ಆಸಕ್ತರು ಹಸ್ತಪ್ರತಿ ವಿಭಾಗವನ್ನು ಸಂಪರ್ಕಿಸಬೇಕೆಂದು ಕೋರುತ್ತೇವೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

ಅಚ್ಚಾದ ಪುಸ್ತಕ

ತೆರೆದ–ಅಂಚೆ



ಶ್ರೀಮತಿ/ಶ್ರೀ.......................................................................................

.......................................................................................

.......................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೪೮೭೭